

# ಕರ್ನಾಟಕ ವಿಧಾನ ಪರಿಷತ್

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1538
ಮಾನ್ಯ ಸದಸ್ಯರ ಹೆಸರು : ಶ್ರೀ ಸಲೀಂ ಅಹಮದ್
ಉತ್ತರಿಸುವ ದಿನಾಂಕ : 11-03-2022
ಉತ್ತರಿಸುವ ಸಚಿವರು ಸಮಾಜ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td rowspan="4">ಹೌದು.<br>ಸಮಾಜ ಕಲ್ಯಾಣ ಇಲಾಖೆಯ ವತಿಯಿಂದ ರಾಜ್ಯದಲ್ಲಿ 1867 ಪರಿಶಿಷ್ಟ ಜಾತಿ ಸರ್ಕಾರಿ ವಿದ್ಯಾರ್ಥಿ ನಿಲಯಗಳನ್ನು ನಡೆಸಲಾಗುತ್ತಿದೆ. ಸದರಿ ವಿದ್ಯಾರ್ಥಿ ನಿಲಯಗಳ ಕಟ್ಟಡದ ವಿವರಗಳು ಈ ಕೆಳಕಂಡಂತಿದೆ.<br><table><tr><th>ಒಟ್ಟು ವಿದ್ಯಾರ್ಥಿ ನಿಲಯಗಳು</th><th>ಸ್ವಂತ ಕಟ್ಟಡ</th><th>ಬಾಡಿಗೆ/ ಬಾಡಿಗೆ ರಹಿತ ಕಟ್ಟಡ</th><th>ನಿರ್ಮಾಣ ಹಂತ</th><th>ನಿವೇಶನ ಲಭ್ಯತೆ</th><th>ನಿವೇಶನ ಗುರುತಿಸಿರುವ</th></tr><tr><td>1867</td><td>1574</td><td>293</td><td>155</td><td>94</td><td>44</td></tr></table><br>ನಿವೇಶನ ಲಭ್ಯವಿರುವ 94 ವಿದ್ಯಾರ್ಥಿ ನಿಲಯಗಳಿಗೆ ಪ್ರಸಕ್ತ ಸಾಲಿನಲ್ಲಿ ಅನುದಾನ ಲಭ್ಯತೆಗೆ ಅನುಗುಣವಾಗಿ ಸ್ವಂತ ಕಟ್ಟಡಗಳನ್ನು ನಿರ್ಮಾಣ ಮಾಡಲು ಕ್ರಮವಹಿಸಲಾಗುತ್ತಿದೆ. ಇನ್ನುಳಿದ 44 ವಿದ್ಯಾರ್ಥಿ ನಿಲಯಗಳಿಗೆ ಗುರುತಿಸಿರುವ ನಿವೇಶನಗಳನ್ನು ಇಲಾಖೆಯ ವಶಕ್ಕೆ ಪಡೆದು, ಅನುದಾನ ಲಭ್ಯತೆಯನ್ನು ಆಧರಿಸಿ ಸ್ವಂತ ಕಟ್ಟಡಗಳನ್ನು ನಿರ್ಮಾಣ ಮಾಡಲು ಕ್ರಮವಹಿಸಲಾಗುವುದು.<br>ಸ್ವಂತ ಕಟ್ಟಡಗಳಲ್ಲಿ ನಡೆಯುತ್ತಿರುವ ವಿದ್ಯಾರ್ಥಿ ನಿಲಯಗಳಲ್ಲಿ ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆಗೆ ಅನುಗುಣವಾಗಿ ಹೆಚ್ಚುವರಿ ವಾಸದ ಕೊಠಡಿ/ಶೌಚಾಲಯ/ಸ್ನಾನಗೃಹಗಳನ್ನು ನಿರ್ಮಾಣ ಮಾಡಲು ಕ್ರಮ ಕೈಗೊಳ್ಳಲಾಗುತ್ತಿದೆ. ಸ್ಥಳಾವಕಾಶ ಲಭ್ಯವಿಲ್ಲದೇ ಇದ್ದಲ್ಲಿ, ಅಗತ್ಯ ಮೂಲಭೂತ ಸೌಲಭ್ಯಗಳುಳ್ಳ ಬಾಡಿಗೆ ಕಟ್ಟಡಗಳಲ್ಲಿ ಹೆಚ್ಚುವರಿ ವಿದ್ಯಾರ್ಥಿಗಳಿಗೆ ವಾಸ್ತವ್ಯ ಕಲ್ಪಿಸಲು ಕ್ರಮವಹಿಸಲಾಗುತ್ತಿದೆ.<br>ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿನಿಲಯಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸುವ ಸಂಬಂಧ ರಾಜ್ಯವಲಯದಿಂದ ವಿದ್ಯಾರ್ಥಿನಿಲಯಗಳಿಗೆ ಅಗತ್ಯವಿರುವ ಸಾಮಗ್ರಿಗಳಾದ ಟೂ ಟಯರ್ ಕಾಟ್, ಸೋಲಾರ್ ವಾಟರ್ ಹೀಟರ್, ಡೈನಿಂಗ್ ಟೇಬಲ್, ಸಿಸಿಟಿವಿ, ಜಮಖಾನ ಬೆಡ್‌ಶೀಟ್, ನೈಟ್‌ಡ್ರೆಸ್, ಟ್ರ್ಯಾಕ್‌ಸೂಟ್, ಸ್ವೆಟರ್ಸ್, ಕಾಯರ್ ಮ್ಯಾಟ್ರಸ್ ಅಂಡ್ ಪಿಲ್ಲೋ ಮತ್ತು ಶಾಲಾ ಬ್ಯಾಗ್‌ಗಳನ್ನು ಸರಬರಾಜು ಮಾಡಲಾಗಿರುತ್ತದೆ.</td></tr>
<tr><td>ಆ)</td><td>ಬಂದಿದ್ದಲ್ಲಿ, ಯಾವ ಯಾವ ಸಮಸ್ಯೆಗಳು ಬಂದಿವೆ;</td></tr>
<tr><td>ಇ)</td><td>ಈ ಸಮಸ್ಯೆಗಳನ್ನು ಬಗೆಹರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು</td></tr>
<tr><td>ಈ)</td><td>ಸೌಲಭ್ಯಗಳ ಕೊರತೆಯಿಂದ ವಿದ್ಯಾರ್ಥಿಗಳ ಶಿಕ್ಷಣ ಹಾಗೂ ಆರೋಗ್ಯಕ್ಕೆ ತೊಂದರೆಯಾಗುವುದಿಲ್ಲವೇ?</td></tr>
</table>

| | | |
|---|---|---|
| | | ಮುಂದುವರೆದು, ವಿದ್ಯಾರ್ಥಿನಿಲಯಗಳಿಗೆ ಅಗತ್ಯವಿರುವ ಇತರೆ ತುರ್ತು ಸಾಮಗ್ರಿಗಳಾದ ಯುಪಿಎಸ್, ವಾಟರ್ ಪ್ಯೂರಿಫೈರ್, ಲೈಬ್ರರಿ ಬುಕ್ಸ್, ಕ್ರೀಡಾ ಸಾಮಗ್ರಿಗಳು, ಇನ್ಸಿನೇಟರ್, ಬೆಂಕಿ ನಂದಿಸುವ ಉಪಕರಣ, ಕಂಪ್ಯೂಟರ್ ಲ್ಯಾಬ್‌ಗಳಿಗೆ ಕಂಪ್ಯೂಟರ್‌ಗಳು, ಪಾತ್ರೆ ಪರಿಕರಗಳು ಹಾಗೂ ಇತರೆ ಅಗತ್ಯ ಸಾಮಗ್ರಿಗಳ ಖರೀದಿಗಾಗಿ ಜಿಲ್ಲೆಗಳಿಗೆ ರೂ.21.76 ಕೋಟಿಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದ್ದು, ವಿದ್ಯಾರ್ಥಿಗಳಿಗೆ ಶಿಕ್ಷಣ ಹಾಗೂ ಆರೋಗ್ಯದ ದೃಷ್ಟಿಯಿಂದ ಉತ್ತಮವಾದ ವಾತಾವರಣವನ್ನು ಕಲ್ಪಿಸಲಾಗಿರುತ್ತದೆ. |

ಸಕಇ 204 ಪಕವಿ 2022

(ಕೋಟ ಶ್ರೀನಿವಾಸ ಪೂಜಾರಿ)
ಸಮಾಜ ಕಲ್ಯಾಣ ಮತ್ತು ಹಿಂದುಳಿದ
ವರ್ಗಗಳ ಕಲ್ಯಾಣ ಸಚಿವರು.